ಜನರೂ ಏಕಾದಶಿ ಯುಕ್ತವಾದ ದ್ವಾದಶಿಯ ದಿನ ಉಪವಾಸ ಮಾಡುತ್ತಾರೆ. ಅವರೆಲ್ಲರಿಗೂ ಪ್ರಲಯಾಗ್ನಿಯ ಭಯ, ಪ್ರಲಯಜಲದ ಭಯವಿಲ್ಲ. ನಿತ್ಯವಾದ ವೈಕುಂಠ ಲೋಕಕ್ಕೆ ಹೋಗುತ್ತಾರೆ. ನಾರದರೇ, ಆ ರಾಜನ ಕಾರ್ಯದಿಂದಾಗಿ ನನ್ನ ಲೋಕಕ್ಕೆ ಬರುವ ದಾರಿಗಳೆಲ್ಲ ಲೋಪ ಹೊಂದಿವೆ. ಈಗ ನಾನು ಕಟ್ಟಿಗೆಯಿಂದ ಮಾಡಿದ ಮೃಗದ ಗೊಂಬೆಯಂತೆ ಯಾವ ಕೆಲಸವೂ ಇಲ್ಲದೆ ಸುಮ್ಮನೆ ಕುಳಿತಿರಬೇಕಾಗಿದೆ. ಈ ರೀತಿ ಕೆಲಸವಿಲ್ಲದೆ ಲೋಕಪಾಲಕ ಪದವಿಯಲ್ಲಿ ಇರಲು ನಾನು ಇಷ್ಟಪಡುವುದಿಲ್ಲ. ಇದನ್ನು ಬಿಡಬೇಕೆಂದು ಆಲೋಚಿಸುತ್ತಿದ್ದೇನೆ. ನನ್ನ ಈ ತೊಂದರೆಯನ್ನು ದುಃಖವನ್ನು ತಿಳಿಸಲು ನಾನು ಬ್ರಹ್ಮಲೋಕಕ್ಕೆ ಹೋಗಲು ನಿರ್ಧರಿಸಿದ್ದೇನೆ,'' ಹೀಗೆ ಹೇಳಿ ಯಮನು ದೇವರ್ಷಿ ನಾರದರು ಮತ್ತು ಚಿತ್ರಗುಪ್ತನೊಡನೆ ಬ್ರಹ್ಮದೇವರ ಲೋಕಕ್ಕೆ ಹೋದನು. ಅಲ್ಲಿ ಸಾಕಾರರಾದ ಮತ್ತು ಅವ್ಯಕ್ತಾಕಾರರಾದ ಜೀವರಿಂದ ಸುತ್ತುವರಿದ ಬ್ರಹ್ಮದೇವರನ್ನು ನೋಡಿದನು.

ಆಗ ಸಮಸ್ತ ಭೂತಗಳ ಶಾಸಕ, ಸೂರ್ಯಪುತ್ರ ಯಮನು ಪಿತಾಮಹನ ಚರಣಗಳ ಮೇಲೆ ಬಿದ್ದನು ಮತ್ತು ಹೇಳಿದನು. ''ದೇವೇಶ್ವರ! ನನಗೆ ಹೆಚ್ಚಿನ ಅವಮಾನವಾಗಿದೆ. ತಿರಸ್ಕಾರ ಉಂಟಾಗಿದೆ. ನನ್ನ ಕಾಗದ ಪತ್ರಗಳಲ್ಲಿ ಜೀವರ ಏನೇನು ಪಾಪಗಳು ಬರೆಯಲ್ಪಟ್ಟಿದ್ದುವೋ, ಅವುಗಳನ್ನೆಲ್ಲ ಅಳಿಸಿದ್ದಾಯಿತು. ಕಮಲಾಸನ ದೇವ, ನಿನ್ನಂತಹ ಸ್ವಾಮಿಯು ಇದ್ದೂ ಕೂಡ ನನಗೆ ಇಂತಹ ಸ್ಥಿತಿಯುಂಟಾಯಿತು. ನಾನು ಅನಾಥನಾದೆನು.'' ಹೀಗೆ ಹೇಳಿ ಯಮಧರ್ಮರಾಜನು ನಿಶ್ಚೇಷ್ಟನಾಗಿ ನಿಂತುಬಿಟ್ಟನು. ಅನಂತರ ಉದಾರಚಿತ್ತನಾದ ಲೋಕಮೂರ್ತಿಯಾದ ವಾಯುದೇವನು ತನ್ನ ಸುಂದರವಾದ ಮತ್ತು ಪುಷ್ಟವಾದ ಭುಜಗಳಿಂದ ಯಮನನ್ನು ಮೇಲಕ್ಕೆತ್ತಿ ಅವನನ್ನೂ ಚಿತ್ರಗುಪ್ತನನ್ನೂ ಆಸನದಲ್ಲಿ ಕುಳ್ಳಿರಿಸಿದನು. ಆಗ ಯಮಧರ್ಮನಿಗೆ ತನ್ನನ್ನು ನೋಡುವವರು, ಸಮಾಧಾನ ಮಾಡುವವರು ಇದ್ದಾರೆಂದು ತೋರಿತು, ಸಂಶಯವು ಸ್ವಲ್ಪಮಟ್ಟಿಗೆ ದೂರವಾಯಿತು.

## ರುಕ್ಮಾಂಗದನ ಪ್ರಭಾವ

ಆಗ ಯಮಧರ್ಮರಾಜನು ಬ್ರಹ್ಮದೇವರ ಸೂಚನೆಯಂತೆ ಮಾತನಾಡಲಾರಂಭಿಸಿದನು. ''ಪಿತಾಮಹ, ಪಿತಾಮಹ, ಸ್ವಾಮಿ, ನನ್ನ ಮಾತನ್ನು ಕೇಳಿರಿ. ದೇವ! ಗೌರವಾನ್ವಿತನಾಗಿದ್ದು ಅವಮಾನ ಹೊಂದುವದು ಮೃತ್ಯುವಿಗಿಂತಲೂ ಅಮಂಗಳಕರವಾದುದು. ದೇವ, ನಾನು ತಮ್ಮ ಅಪ್ಪಣೆಯಿಂದ ಧರ್ಮದಿಂದ ನನ್ನ ಶಾಸನವನ್ನು ನಡೆಸುತ್ತಾ ಇದ್ದೆನು. ಪ್ರಭುವೇ! ನಾನು ಮುನಿಗಳ ಉಪದೇಶದಿಂದಲೂ ಧರ್ಮಶಾಸ್ತ್ರ ಮುಂತಾದವುಗಳ ವಿಮರ್ಶೆಯಿಂದಲೂ ನಿರ್ಣಯ ಮಾಡಿಕೊಂಡು ಪುಣ್ಯ ಮಾಡಿದವರಿಗೆ ಪುಣ್ಯದ ಫಲವನ್ನು ಕೊಟ್ಟು ಪಾಪ ಮಾಡಿದವರಿಗೆ ಪಾಪದ ಫಲವಾದ ಶಿಕ್ಷೆಯನ್ನೇ ಕೊಡುತ್ತಿದ್ದೆನು. ಕಲ್ಪದ ಆದಿಯಿಂದ ಆರಂಭಿಸಿ ನಿಮ್ಮ ಒಂದು ದಿನವು ಪೂರ್ತಿಯಾಗುವವರೆಗೂ ನಾನು ನಿಮ್ಮ ಅಪ್ಪಣೆ ಪ್ರಕಾರ ಎಲ್ಲಾ ಕೆಲಸವನ್ನೂ ಮಾಡುತ್ತ ಬಂದಿದ್ದೇನೆ. ಮುಂದೆಯೂ ಮಾಡಬಲ್ಲೆ; ಆದರೆ ಇಂದು ರುಕ್ಮಾಂಗದ ಮಹಾರಾಜನು ನನಗೆ ಮಹತ್ತಾದ ಅವಮಾನ ಮಾಡಿದ್ದಾನೆ. ಜಗತ್ ಸ್ವಾಮಿಯೇ, ಆ ರಾಜನ ಶಾಸನ ಭಯದಿಂದಾಗಿ ಸಮುದ್ರಾವೃತವಾದ ಸಮಗ್ರ ಭೂಮಂಡಲದ ಜನರೆಲ್ಲರೂ ಸರ್ವ ಪಾಪನಾಶಕವಾದ ಏಕಾದಶೀ ವ್ರತವನ್ನು ಆಚರಿಸುತ್ತಾರೆ. ಆ ದಿನ ಭೋಜನ